## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 704 |
| ಸದಸ್ಯರ ಹೆಸರು | : | ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 17-12-2021. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ಪ್ರಕಟಣೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಗಮನಕ್ಕೆ ಬಂದಿದ್ದಲ್ಲಿ, ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br><br>ಮಾನ್ಯ ಕರ್ನಾಟಕ ರಾಜ್ಯ ಆಡಳಿತ ನ್ಯಾಯ ಮಂಡಳಿಯು ಶ್ರೀ ಗೋಪಾಲಕೃಷ್ಣ ಸಿ ಮತ್ತು ಇತರರು ಸಲ್ಲಿಸಿದ್ದ ಅರ್ಜಿ ಸಂಖ್ಯೆ 2259 ರಿಂದ 2792/2014 ಮತ್ತು ಇತರೆ ಅರ್ಜಿಗಳಲ್ಲಿ ದಿನಾಂಕ: 18.03.2019 ರಂದು ನೀಡಿರುವ ಆದೇಶದಲ್ಲಿ ಸರ್ಕಾರವು ದಿನಾಂಕ: 21.02.2014ರಂದು ಪ್ರಕಟಿಸಿದ್ದ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ರದ್ದುಪಡಿಸಿದೆ ಹಾಗೂ ದಿನಾಂಕ: 03.03.2010 ರಂದು ಖಾಲಿ ಇದ್ದ 178 ಪಂಚಾಯಿತಿ ವಿಸ್ತರಣಾಧಿಕಾರಿ ಹುದ್ದೆಗಳಿಗೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಗ್ರೇಡ್-1 ವೃಂದದಿಂದ ಪೂರ್ವಾನ್ವಯ ಬಡ್ತಿ ನೀಡಲು ಪರಿಗಣಿಸುವಂತೆ ಹಾಗೂ ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಗಳು 1957 ರ ನಿಯಮ 5(1)ಎ ಅನುಸರಿಸಿ ಜೇಷ್ಠತೆ ನಿಗದಿಪಡಿಸಲು ನಿರ್ದೇಶಿಸಿರುತ್ತದೆ.<br><br>ಸರ್ಕಾರವು ಈ ವಿಷಯಕ್ಕೆ ಸಂಬಂಧಪಟ್ಟಂತೆ ಪರಿಶೀಲಿಸಿ ಕ್ರಮವಹಿಸುವ ಸಂಬಂಧ ಆಯುಕ್ತರು ಪಂಚಾಯತ್ ರಾಜ್ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ. |
| (ಆ) | ಈಗಾಗಲೇ ಪ್ರಕಟವಾಗಿರುವ ಪಿ.ಡಿ.ಓ. ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯು ಲೋಪದೋಷಗಳಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅದನ್ನು ಸರಿಪಡಿಸಲು ಕೈಗೊಂಡ ಕ್ರಮಗಳೇನು; | |
| (ಇ) | ಪಿ.ಡಿ.ಓಗಳ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ಇದುವರೆಗೆ ಪ್ರಕಟಸದಿರಲು ಕಾರಣಗಳೇನು; (ವಿವರ ನೀಡುವುದು) | ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮೇಲ್ಕಂಡ ಆದೇಶವನ್ನು ಪ್ರಶ್ನಿಸಿ ಶ್ರೀ ಬಾಬು ರಾಥೋಡ ಮತ್ತು ಇತರರು ಮಾನ್ಯ ಉಚ್ಚ ನ್ಯಾಯಾಲಯ, ಕಲಬುರಗಿ ಪೀಠ ಇಲ್ಲಿ ರಿಟ್ ಅರ್ಜಿ ಸಂಖ್ಯೆ:201903/2019 ಯನ್ನು ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯ, ಕಲಬುರಗಿ ಪೀಠವು ದಿನಾಂಕ 09.04.2019 ರ ಆದೇಶದಲ್ಲಿ ಮಾನ್ಯ ಕೆ.ಎ.ಟಿ. ಆದೇಶಕ್ಕೆ ತಡೆಯಾಜ್ಞೆ ನೀಡಿತ್ತು. ಮುಂದುವರೆದು ದಿನಾಂಕ 19.06.2019 ರ ಆದೇಶದಲ್ಲಿ ಯಥಾಸ್ಥಿತಿಯನ್ನು ಕಾಪಾಡಲು ಆದೇಶಿಸಿತ್ತು. ಈ ಮಧ್ಯೆ ರಾಜ್ಯ ಸರ್ಕಾರವೂ ಸಹ ಮಾನ್ಯ ಕೆ.ಎ.ಟಿ. ಆದೇಶವನ್ನು ಪ್ರಶ್ನಿಸಿ ಮಾನ್ಯ ಉಚ್ಚನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಅರ್ಜಿ ಸಂಖ್ಯೆ 33613/2019ನ್ನು ಸಲ್ಲಿಸಿರುತ್ತದೆ. ಮುಂದುವರೆದು, ಶ್ರೀ ಕೆ.ಪಿ. ಸಂಜೀವಪ್ಪ ಎನ್ನುವವರೂ ಸಹ ಮಾನ್ಯ ಉಚ್ಚನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಅರ್ಜಿ ಸಂಖ್ಯೆ 26196/2019ನ್ನು ಸಲ್ಲಿಸಿದ್ದರು. ಮಾನ್ಯ ಉಚ್ಚನ್ಯಾಯಾಲಯದ ಮುಖ್ಯ ಪೀಠವು ಈ ರಿಟ್ ಅರ್ಜಿಯಲ್ಲಿ ದಿನಾಂಕ: 29.11.2019 ರಂದು ಈ ಕೆಳಕಂಡಂತೆ ಆದೇಶಿಸಿದೆ.<br><br>"Parties are directed to maintain status quo with reference to seniority list until these writ petitions and other writ petition filed by the |

| | | |
|---|---|---|
| | | State are decided on merits.<br>List these writ petitions along with W.P. No. 33613/2019".<br><br>ಪ್ರಸ್ತುತ ಈ ರಿಟ್ ಅರ್ಜಿಗಳ ಬಗ್ಗೆ ಕಲಬುರಗಿ ಪೀಠದಲ್ಲಿ ವಿಚಾರಣೆ ನಡೆಸಲಾಗುತ್ತಿದ್ದು, ದಿನಾಂಕ 09.07.2020 ರ ಆದೇಶದಲ್ಲಿ List these matters after Physical Hearing Restored. ಎಂದು ಆದೇಶಿಸಿದ್ದು, ತದನಂತರ ಈ ಪ್ರಕರಣ ವಿಚಾರಣೆಗೆ ಬಂದಿದ್ದರೂ, ಈ ಪ್ರಕರಣದಲ್ಲಿ ವಾದ ಪ್ರತಿವಾದಗಳು ಮುಂದುವರೆದಿದ್ದು, ಈವರೆವಿಗೂ ಇತ್ಯರ್ಥಗೊಂಡಿರುವುದಿಲ್ಲ. ಪ್ರಕರಣ ಮಾನ್ಯ ಉಚ್ಚ ನ್ಯಾಯಾಲಯ, ಕಲಬುರಗಿ ಪೀಠ ಇಲ್ಲಿ ಬಾಕಿ ಇರುತ್ತದೆ. |
| (ಈ) | ಯಾವ ಕಾಲಮಿತಿಗೆ ಒಳಪಟ್ಟು ಪಿ.ಡಿ.ಓ ಗಳ ರಾಜ್ಯ ಮಟ್ಟದ ಪರಿಷ್ಕೃತ ಜೇಷ್ಠತಾ ಪಟ್ಟಿಯನ್ನು ಬಿಡುಗಡೆ ಮಾಡಲಾಗುವುದು; ಈ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವೇನು? | ಆಯುಕ್ತರು ಪಂಚಾಯತ್ ರಾಜ್ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ. ಸಮಿತಿಯು ನೀಡುವ ವರದಿಯನ್ನು ಆಧರಿಸಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಪ್ರಕರಣದಲ್ಲಿ ನೀಡಬಹುದಾದ ಆದೇಶವನ್ನು ಪರಿಗಣಿಸಿ ಜೇಷ್ಠತಾ ಪಟ್ಟಿಯನ್ನು ಸಿದ್ದಪಡಿಸಲಾಗುತ್ತದೆ. |

ಸಂಖ್ಯೆ: ಗ್ರಾಅಪ 433 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.